ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಗ್ರಾಮೀಣ ಸೇವೆಯನ್ನು ಮಾಡುವುದಾಗಿ ಮುಚ್ಚಳಿಕೆ ಬರೆದುಕೊಟ್ಟು ಅದನ್ನು ಉಲ್ಲಂಘಿಸುತ್ತಿರುವ ವೈದ್ಯರುಗಳ ವಿರುದ್ಧ ಕ್ರಮದ ಬಗ್ಗೆ

ಶ್ರೀ ಸುನೀಲ್ ಸುಬ್ರಮಣಿ ಎಂ. ಪಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

108 (100) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕಳೆದ ಐದು ವರ್ಷಗಳಲ್ಲಿ ಸರ್ಕಾರಿ ಕೋಟಾದಡಿಯಲ್ಲಿ ಪ್ರವೇಶ ಪಡೆದು ಗ್ರಾಮೀಣ ಸೇವೆಯನ್ನು ಮಾಡುವುದಾಗಿ ಮುಚ್ಚಳಿಕೆ ಬರೆದುಕೊಟ್ಟು ಅದನ್ನು ಉಲ್ಲಂಘಿಸಲಾಗಿರುವ 589 ವೈದ್ಯರುಗಳ ವಿರುದ್ಧ ದಿನಾಂಕ: 20.08.2017 ರಂದು ಕೆ.ಎಂ.ಸಿಗೆ ಪತ್ರ ಬರೆಯಲಾದ ಪ್ರಕರಣದಲ್ಲಿ ಇಲ್ಲಿಯವರೆಗೆ ಆಗಿರುವ ಪ್ರಗತಿಯ ಬಗ್ಗೆ ವಿವರ ನೀಡುವುದು;

(ಆ) ಷರತ್ತು ಉಲ್ಲಂಘಿಸಿ ಗ್ರಾಮೀಣ ಸೇವೆ ಮಾಡದ ವೈದ್ಯರುಗಳ ಮೇಲೆ ವಿಧಿಸುವ ದಂಡದ ಹಣವನ್ನು ರೂ.1.00 ಕೋಟಿ ರೂಪಾಯಿಗಳಿಗೆ ಏರಿಸಲು ಸರ್ಕಾರದ ನಿಲುವೇನು; (ವಿವರ ನೀಡುವುದು)

(ಇ) ಗ್ರಾಮೀಣ ಸೇವೆಯನ್ನು ಮಾಡದ ವೈದ್ಯರುಗಳ ಮೇಲೆ ಸರ್ಕಾರದ ತ್ವರಿತ ಮತ್ತು ಗಂಭೀರವಾದ ಕಠಿಣ ಕ್ರಮಗಳೇನು? (ವಿವರ ನೀಡುವುದು)